# ಆರಂಭಿಕ ಓದುಗರಿಗೆ ಬಾಲ ಸಾಹಿತ್ಯ : ಕೆಲವು ಸವಾಲುಗಳು

**ಚಂದನ್ ಯಾದವ್**

*ಮಕ್ಕಳು ಶಾಲೆಗೆ ಬಂದು ಓದಲು - ಬರೆಯಲು ಕಲಿಯುತ್ತಾರೆ. ಈ ಪ್ರಕ್ರಿಯೆಯು ಮಕ್ಕಳಲ್ಲಿ ಓದುವ ತೀವ್ರ ಆಸಕ್ತಿಯನ್ನು ಬೆಳೆಸಿ ಅವರು ಸಮರ್ಥ ಓದುಗರಾಗುವಂತೆ ಮಾಡಬೇಕು. ಶಾಲೆಯಿಂದ ಹೊರಗೆ ಹೋಗುವಷ್ಟರಲ್ಲಿ ವಿದ್ಯಾರ್ಥಿಗಳು ಸಮರ್ಥ ಹಾಗೂ ಸ್ವತಂತ್ರ ಓದುಗರಾಗುವಂತೆ ಮಾಡುವುದು ಅತ್ಯಗತ್ಯ. ಕಲಿಯುವಲ್ಲಿ ವಿದ್ಯಾರ್ಥಿಗಳು ಸ್ವಾವಲಂಬಿಗಳಾಗಲು ಹಾಗೂ ಕಲಿಕೆಯ ಪ್ರಕ್ರಿಯೆಯಲ್ಲಿ ಜೀವನದುದ್ದಕ್ಕೂ ಭಾಗಿಗಳಾಗುವಂತೆ ಮಾಡುವಲ್ಲಿ ಇದೊಂದು ಮಹತ್ವಪೂರ್ಣ ತಳಹದಿಯಾಗಿದೆ. ಆದರೆ ಶಾಲೆಗಳು ಮಕ್ಕಳನ್ನು ಸಮರ್ಥ ಓದುಗರನ್ನಾಗಿ ಮಾಡುತ್ತಿವೆಯೇ? ಓದುವುದು - ಬರೆಯುವುದನ್ನು ಕಲಿಸುವ ಪ್ರಕ್ರಿಯೆಯಲ್ಲಿ ಮಕ್ಕಳು ಅಕ್ಷರ ಜ್ಞಾನ ಹಾಗೂ ಗುಣಿತಾಕ್ಷರ ಜ್ಞಾನ ಪಡೆದು ಹೇಗೋ ಕೂಡಿಸಿ – ಸೇರಿಸಿ ಓದುವುದನ್ನು ಕಲಿತುಬಿಟ್ಟರೂ ಪುಸ್ತಕದೊಂದಿಗೆ ಅವರ ಗೆಳೆತನ ಅದೇಕೋ ಆಗುವುದೇ ಇಲ್ಲ. ಚಂದನ್ ಯಾದವ್ ರವರು ಪ್ರಾಥಮಿಕ ತರಗತಿಗಳಲ್ಲಿ ಬಳಕೆಯಾಗುವ ಓದಿನ ಸಾಮಗ್ರಿಗಳ ವಿಶ್ಲೇಷಣೆಯ ಮುಖಾಂತರ ಇವೇ ಸವಾಲುಗಳನ್ನು ಈ ಲೇಖನದಲ್ಲಿ ಒರೆಗೆ ಹಚ್ಚಿದ್ದಾರೆ.*

**ಪ್ರಮುಖ ಪದಗಳು:** ಬಾಲಸಾಹಿತ್ಯ, ಓದುವಿಕೆ, ಸ್ವತಂತ್ರ ಓದುಗ, ಕಲಿಕಾ ಪ್ರಕ್ರಿಯೆ, ಅಕ್ಷರ ಜ್ಞಾನ, ಅರ್ಥ ಗ್ರಹಿಕೆ, ಓದುವ ಆನಂದ, ಆಸಕ್ತಿ, ಅನುಭವಗಳ ಗಳಿಕೆ, ಭಾಷೆಯ ಸೊಗಸು, ಆಲೋಚಿಸುವಿಕೆ, ಸಂಬಂಧ ಕಲ್ಪನೆ, ಇತ್ಯಾದಿ.

***

ಬಾಲ ಸಾಹಿತ್ಯವು ಮಕ್ಕಳ ತನಕ ತಲುಪುವಲ್ಲಿ ಎರಡು ಪ್ರಮುಖ ಸಂಗತಿಗಳಿವೆ. ಮೊದಲನೆಯದು "ಮಕ್ಕಳು ಓದುವುದನ್ನು ಕಲಿತ ನಂತರ ಬಾಲ ಸಾಹಿತ್ಯವನ್ನು ನೀಡಬೇಕೇ ಅಥವಾ ಅದರ ಜೊತೆಯಲ್ಲಿಯೇ ಕೊಡಬೇಕೇ?" ಹಾಗೂ ಎರಡನೆಯದು "ಯಾವುದನ್ನು ಬಾಲ ಸಾಹಿತ್ಯ ಎನ್ನಬೇಕು?" ನಾವು ಒಂದೊಂದಾಗಿ ಎರಡೂ ಆಯಾಮಗಳನ್ನು ಕುರಿತು ಮಾತನಾಡೋಣ. ಮೊದಲನೆಯ ಸಂಗತಿ "ಓದುವ ಅರ್ಥ"ಕ್ಕೆ ಸಂಬಂಧಿಸಿದ್ದು ಹಾಗೂ ಎರಡನೆಯದು "ಮಕ್ಕಳು ಹಾಗೂ ಬಾಲಸಾಹಿತ್ಯದ ಅರ್ಥ"ಕ್ಕೆ ಸಂಬಂಧಿಸಿದೆ.

ನಮ್ಮ ಮಾತನ್ನು ಮೊದಲನೆಯ ವಿಷಯದೊಂದಿಗೆ ಆರಂಭಿಸೋಣ. ಮಕ್ಕಳ ಶಿಕ್ಷಣದೊಂದಿಗೆ ಬೆಸೆದುಕೊಂಡ ವ್ಯಕ್ತಿಗಳಾದ ಶಿಕ್ಷಕರು ಹಾಗೂ ಪೋಷಕರು ಮಕ್ಕಳಿಗೆ ಓದುವುದನ್ನು ಕಲಿತ ನಂತರ ಪುಸ್ತಕಗಳನ್ನು ಕೊಡಬೇಕೆಂಬುದನ್ನು ಒಪ್ಪುತ್ತಾರೆ. ರಾಜ್ಯದ ಹತ್ತಾರು ಶಾಲೆಗಳ ವೀಕ್ಷಣೆಯಲ್ಲಿ ನಾನು ಕಂಡುಕೊಂಡ ಅಂಶವೆಂದರೆ ಮಕ್ಕಳಿಗಾಗಿ ಗ್ರಂಥಾಲಯದ ಪುಸ್ತಕಗಳು ಲಭ್ಯವಿವೆ. ಆದರೆ ಒಂದು ಮತ್ತು ಎರಡನೇ ತರಗತಿಯ ಮಕ್ಕಳಿಗೆ ಪುಸ್ತಕಗಳನ್ನು ಕೊಡಲಾಗುವುದಿಲ್ಲ. ಇದರ ಹಿಂದೆ ಓದುವುದನ್ನು ಕುರಿತಾದ ಪರಂಪರಾನುಗತ ಕಲ್ಪನೆಯಿದೆ. ಮಕ್ಕಳು ಎಲ್ಲ ಅಕ್ಷರಗಳು ಹಾಗೂ ಗುಣಿತಾಕ್ಷರಗಳನ್ನು ಗುರುತಿಸುವುದು, ಮಾತನಾಡುವುದು ಮತ್ತು ಕೂಡಿಸಿ ಓದುವುದನ್ನು ಕಲಿತ ನಂತರ ಅವರು ಓದುವುದನ್ನು ಕಲಿತಿದ್ದಾರೆ ಎಂದು ನಾವು ಹೇಳಬಹುದು. ಈ ಕಲ್ಪನೆಯಿಂದ ನಡೆಯುತ್ತಿರುವ ಜನ ಮೊದಲು ಮಕ್ಕಳಿಗೆ ಅಕ್ಷರಗಳನ್ನು ಕಲಿಸುತ್ತಾರೆ. ನಂತರ ಗುಣಿತಾಕ್ಷರಗಳನ್ನು ಕಲಿಸಿ, ಆ ನಂತರ ಪದಗಳನ್ನು ಕಲಿಸುತ್ತಾರೆ. ವಾಕ್ಯದ ಓದುವಿಕೆಯ ಸರದಿ ಕೊನೆಯಲ್ಲಿ ಬರುತ್ತದೆ. ಓದನ್ನು ವಿಧಾನದ ದೃಷ್ಟಿಯಿಂದ ನೋಡುವವರು ಮಕ್ಕಳು ಓದುವುದನ್ನು ಕಲಿತ ನಂತರವೇ ಅವರಿಗೆ ಪುಸ್ತಕವನ್ನು ಕೊಡಬೇಕೆನ್ನುವುದು ಸ್ವಾಭಾವಿಕವಾಗಿದೆ.

ಓದುವಿಕೆಯ ಹೊಸ ಪರಿಕಲ್ಪನೆಯ ಪ್ರಕಾರ ಚಿತ್ರಗಳನ್ನು ನೋಡಿ ಅರ್ಥೈಸಿಕೊಳ್ಳುವುದು, ಪುಸ್ತಕದ ಪುಟಗಳನ್ನು ತಿರುವುತ್ತಾ ಚಿತ್ರದ ಆಧಾರದ ಮೇಲೆ ಮನಸ್ಸಿನಲ್ಲಿಯೇ ಕತೆ ಹೆಣೆಯುವುದು (ಲೋಗೋಗ್ರಾಫಿಕ್ ರೀಡಿಂಗ್) ಹಾಗೂ ಕತೆ-ಕವಿತೆಗಳನ್ನು ಕೇಳುವುದೂ ಆರಂಭಿಕ ಓದುವಿಕೆಯೇ ಆಗಿದೆ. ಓದುವ ಈ ಪರಿಕಲ್ಪನೆಯ ಪ್ರಕಾರ ಓದುವ ಅರ್ಥವೆಂದರೆ ಮುದ್ರಿತ ಸಾಮಗ್ರಿಯಿಂದ ಅರ್ಥವನ್ನು ಗ್ರಹಿಸುವುದು. ಇದರಲ್ಲಿ ಇತರ ಹಲವು ಕೌಶಲಗಳಿವೆ; ಅವುಗಳಲ್ಲಿ ಪೂರ್ವಜ್ಞಾನವನ್ನು

ಉಪಯೋಗಿಸುವುದು, ಸಂದರ್ಭ ಹಾಗು ವಿಷಯವನ್ನು ಅರ್ಥಮಾಡಿಕೊಳ್ಳುವುದು, ಊಹಿಸುವುದು, ಸಂಬಂಧ ಕಲ್ಪಿಸುವುದು, ಮುಂತಾದವು ಪ್ರಮುಖವಾಗಿವೆ.

ಓದುವಿಕೆಯ ಪಾರಂಪರಿಕ ಪರಿಕಲ್ಪನೆಯು ಮಕ್ಕಳನ್ನು ಪುಸ್ತಕಗಳಿಂದ ವಂಚಿತರನ್ನಾಗಿ ಮಾಡುವ ಜೊತೆಗೆ ಓದುವುದನ್ನು ಕಲಿಸುವಲ್ಲಿ ಉಪಯೋಗಿಸುವ ವಿಷಯವಸ್ತುವಿನ ಮೇಲೂ ನಕಾರಾತ್ಮಕ ಪ್ರಭಾವವನ್ನು ಬೀರುತ್ತದೆ. ಯಾವುದೇ ರಚನೆಯು, ಅದೆಷ್ಟೇ ಉತ್ತಮವಾಗಿದ್ದರೂ, ಒಂದಿಷ್ಟು ಅಕ್ಷರಗಳನ್ನು ಕಲಿಸಲು ಅದು ಉಪಯುಕ್ತವಾಗದಿದ್ದರೆ ಅದನ್ನು ಪಠ್ಯಪುಸ್ತಕದ ಭಾಗವಾಗಿ ಮಾಡುವುದೇ ಇಲ್ಲ. ಇದನ್ನು ನಾವು ಪಠ್ಯಪುಸ್ತಕದಿಂದ ತೆಗೆದುಕೊಂಡ ಕೆಲವು ಉದಾಹರಣೆಗಳಲ್ಲಿ ನೋಡಬಹುದಾಗಿದೆ.

**ಪಠ್ಯಪುಸ್ತಕಗಳಲ್ಲಿನ ರಚನೆಗಳು**

ನಮ್ಮ ದೇಶದಲ್ಲಿ ಬಹುತೇಕ ಮಕ್ಕಳಿಗೆ ಓದಲು ದೊರೆಯುವ ಏಕಮಾತ್ರ ಪುಸ್ತಕವೆಂದರೆ ಅದು ಅವರ ಭಾಷಾ ಪಠ್ಯಪುಸ್ತಕ. ನಾನು ಉತ್ತರ ಪ್ರದೇಶ, ಬಿಹಾರ, ಛತ್ತೀಸ್ ಗಢ್ ಮುಂತಾದ ಹಿಂದೀ ಭಾಷಿಕ ರಾಜ್ಯಗಳ ಹಿಂದೀ ಪುಸ್ತಕಗಳನ್ನು ನೋಡಿದ್ದೇನೆ. ಅದರ ಆಧಾರದ ಮೇಲೆ ಹೇಳಬೇಕೆಂದರೆ ಬಹಳಷ್ಟು ಮಕ್ಕಳ ಪತ್ರಿಕೆಗಳು ಮತ್ತು ವೃತ್ತಪತ್ರಿಕೆಗಳಲ್ಲಿ ಮಕ್ಕಳಿಗಾಗಿ ನಿಗದಿಪಡಿಸಲಾದ ವಿಭಾಗದಲ್ಲಿ ಕಾಣುವ ರಚನೆಗಳಿಗೆ ಹೋಲಿಸಿದಲ್ಲಿ ಪಠ್ಯಪುಸ್ತಕಗಳಿಗಾಗಿ ಆರಿಸಿಕೊಂಡಿರುವ ರಚನೆಗಳು ಬಹಳಷ್ಟು ಉತ್ತಮವಾಗಿವೆ ಎನ್ನಬಹುದು. ಈ ನಿಟ್ಟಿನಲ್ಲಿ ಎನ್.ಸಿ.ಇ.ಆರ್.ಟಿ. ಯ ರಿಮ್‌ಝಿಮ್ ಪುಸ್ತಕವನ್ನು ಹೆಸರಿಸಿ ಪ್ರಶಂಸಿಸಬಹುದಾಗಿದೆ.

ಪಠ್ಯಪುಸ್ತಕಗಳಲ್ಲಿ ಆರಿಸಿಕೊಂಡ ರಚನೆಗಳ ಸವಾಲುಗಳು ಮತ್ತೊಂದು ರೀತಿಯವು, ಇವು ಓದುವ ಪಾರಂಪರಿಕ ಕಲ್ಪನೆಗೆ ಸಂಬಂಧಿಸಿವೆ. ಅದರ ಪ್ರಕಾರ ಮಕ್ಕಳಿಗೆ ಮೊದಲು ವರ್ಣಮಾಲೆಯನ್ನು ಕಲಿಸಬೇಕಾಗುತ್ತದೆ. ಇದಕ್ಕಾಗಿ ಈಗ ಕ ಖ ಗ ಘ ರೀತಿಯ ಕ್ರಮ ಆಚರಣೆಯಲ್ಲಿ ಇರದಿದ್ದರೂ ಈ ಮುಂಚೆ ಮಕ್ಕಳಿಗೆ ಸ್ವತಂತ್ರವಾಗಿ ಓದಲು ಪುಸ್ತಕವನ್ನು ಕೊಡುವ ಬದಲು ವರ್ಣಮಾಲೆಯನ್ನು ಪೂರ್ಣವಾಗಿ ಕಲಿಸಬೇಕಿತ್ತು. ಇಂತಹ ಗ್ರಹಿಕೆಗಳಿಂದ ನಿರ್ದೇಶಿತವಾದ ಪಠ್ಯಪುಸ್ತಕ ರಚಿಸುವ ತಂಡವು ಈ ಕ್ರಮಕ್ಕೆ ಹೊಂದುವ ಯಾವುದೋ ಒಂದು ತರ್ಕಹೀನ ಕವಿತೆಯನ್ನು ಜೋಡಿಸಿ ಹಾಕಿಬಿಡುತ್ತದೆ. ಅದಕ್ಕಿರುವ ಒಂದೇ ಒಂದು ಷರತ್ತೆಂದರೆ ಆ ರಚನೆಯಲ್ಲಿ ಕಲಿಸಲು ಉದ್ದೇಶಿಸಿರುವ 4-5 ಅಕ್ಷರಗಳು ಇರಬೇಕು ಎನ್ನುವುದು. ಉದಾಹರಣೆಗೆ ಕೆಲವು ಪಠ್ಯಪುಸ್ತಕಗಳಲ್ಲಿ ಕಂಡುಬರುವ ರಚನೆಗಳನ್ನು ಗಮನಿಸಿ:

ಋ ಹಾಗೂ ತ್ರ ಅಕ್ಷರಗಳನ್ನು ಕಲಿಸಲು:

| | |
|---|---|
| **ವರ್ಷಾ ಕೀ ಋತ್ ಆಯೀ ಹೈ** | **(ಮಳೆಯ ಋತು ಬಂದಿದೆ** |
| **ತ್ರಣ ಪರ್ ಹರಿಯಾಲೀ ಛಾಯೀ ಹೈ** | **ಹುಲ್ಲಿನ ಮೇಲೆ ಹಸಿರು ಹಾಸಿದೆ)** |

(ಹರಿಯಾಣದ ಝಿಲ್‌ಮಿಲ್)

ಗ ಮತ್ತು ರ ಅಕ್ಷರಗಳನ್ನು ಕಲಿಸಲು:

| | |
|---|---|
| **ಗಮಲಾ ಫೂಲೋಂ ವಾಲಾ ಲಾವೋ** | **(ಕುಂಡ ಹೂವಿನದನ್ನು ತಾ** |
| **ಅಪನಾ ಘರ್ ಆಂಗನ್ ಮಹಕಾವೋ** | **ನಿನ್ನ ಮನೆ ಅಂಗಳ ಘಮಘಮಿಸು** |
| **ನಲ್ ಸೇ ಪಾನೀ ಲೇಕರ್ ಆವೋ** | **ನಲ್ಲಿಯಿಂದ ನೀರು ತೆಗೆದುಕೊಂಡು ಬಾ** |
| **ಪೌಧೋಂ ಕೀ ತುಮ್ ಪ್ಯಾಸ್ ಬುಝಾವೋ** | **ಗಿಡಗಳ ಬಾಯಾರಿಕೆ ನೀಗಿಸು ನೀನು** |
| **ಮಛಲೀ ದೇಖೋ ಆವೋ, ಆವೋ** | **ಮೀನು ನೋಡು ಬಾ ಬಾ** |
| **ರಸ್ಸೀ ಕೂದೋ ನಾಚೋ ಗಾವೋ** | **ಹಗ್ಗ ಜಿಗಿದು ಕುಣಿದು ಹಾಡು)** |

(ಸಮೇಕಿತ್, ಛತ್ತೀಸ್ ಗಢ)

ಈ ಸ್ಥಿತಿಯನ್ನು ಒಂದು ಮಗುವಿನ ದೃಷ್ಟಿಯಿಂದ ನೋಡಿ. ಒಂದನೇ ತರಗತಿಗೆ ಒಂದು ಮಗುವಿಗೆ ಆಗಷ್ಟೇ ಲಿಖಿತ ಸಾಮಗ್ರಿಗಳ ಪರಿಚಯವಾಗುತ್ತಿರುವ ಸಮಯ. ಈ ಸಮಯದಲ್ಲಿ ಅವರಿಗೆ ಓದುವುದು ಒಂದು ಸಂಭ್ರಮದ ಕಾರ್ಯ ಎನಿಸಬೇಕು. ಹಾಗಾದಾಗ ಮಗುವಿಗೆ ಕಲಿಯಲು ಸ್ಫೂರ್ತಿ ಸಿಗುತ್ತದೆ. ಆದರೆ ವಾಸ್ತವ ಇದಕ್ಕೆ ತದ್ವಿರುದ್ಧವಾಗಿದೆ.

**ಬಚ್ಚೋ ತುಮ್ ಭೀ ಅಬ್ ಉಠ್ ಜಾವೋ (ಮಕ್ಕಳೇ ನೀವೂ ಈಗ ಎದ್ದುಬಿಡಿ)**
**ಮಾತಾ ಪಿತಾ ಕೋ ಶೀಶ್ ನವಾವೋ| ಅಮ್ಮ-ಅಪ್ಪನಿಗೆ ತಲೆ ಬಾಗಿ)**

ಶಾಲೆಯ ಹೊರಗೂ ಸಾವಿರಾರು ರೀತಿಯಲ್ಲಿ ಇದೇ ಮಾತನ್ನು ಮಕ್ಕಳಿಗೆ ಹೇಳಲಾಗುತ್ತಿದೆ. ಅವರು ಮತ್ತೆ ಅದನ್ನು ಓದುವುದನ್ನು ಏಕೆ ಕಲಿಯಬೇಕು?

ಓದುವುದನ್ನು ಕಲಿಸುವ ಪಾರಂಪರಿಕ ಕಲ್ಪನೆಯ ಪರಿಣಾಮ ಇದೇ ಆಗಿರುತ್ತದೆ. ಇದರ ಹಿಡಿತದಲ್ಲಿ ಬಾಲ ಸಾಹಿತ್ಯದ ಜಾಗವು ಕಡಿಮೆಯಾಗುತ್ತಾ ಹೋಗುತ್ತದೆ. ಇದರೊಂದಿಗೆ ಕಳೆದುಹೋಗುವ ಮತ್ತೆ ಕೆಲವು ಅಂಶಗಳಿವೆ. ಅವೆಂದರೆ, ಓದುವ ಆನಂದ, ಓದುವ ಆಸಕ್ತಿ, ಹೊಸ ಅನುಭವಗಳ ಗಳಿಕೆ, ಭಾಷೆಯ ಸೊಗಸು, ಆಲೋಚಿಸುವ ಮತ್ತು ಅನುಭವದೊಂದಿಗೆ ಸಂಬಂಧ ಕಲ್ಪಿಸುವ ಇಚ್ಛೆ, ಮುಂತಾದವು. ಆದರೆ ಪಾರಂಪರಿಕ ಕ್ರಮದಲ್ಲಿ ವಿದ್ಯಾರ್ಥಿಗಳ ಪ್ರಮುಖ ಪಾತ್ರ ಓದುವುದು ಮತ್ತು ಬರೆಯುವುದನ್ನು ಕಲಿಯುವುದು. ಅವರು ಸ್ವತಂತ್ರ ಓದುಗರೂ ಆಗಬಹುದು. ಆದರೆ ಅದು ದೂರದ ಮಾತು!

ಬಾಲ ಸಾಹಿತ್ಯಕ್ಕೆ ಸಂಬಂಧಿಸಿದ ಇನ್ನೊಂದು ಸಂಗತಿಯೆಂದರೆ ನಾವು 'ಬಾಲ ಸಾಹಿತ್ಯ' ಎಂದು ಯಾವುದನ್ನು ಕರೆಯಬೇಕು? ಎನ್ನುವುದು.

ಇದನ್ನು ಮತ್ತಷ್ಟು ವಿಸ್ತರಿಸಿ ಹೇಳಬೇಕೆಂದರೆ ಬಾಲಸಾಹಿತ್ಯ ಮಕ್ಕಳ ಆಸಕ್ತಿ ಮತ್ತು ಸವಾಲುಗಳನ್ನು ಹೆಚ್ಚಿಸುತ್ತಿದೆಯೇ? ಅದು ಮಕ್ಕಳ ಅನುಭವಕ್ಕೆ ಒಂದಿಷ್ಟು ಹೊಸತೇನಾದರೂ ಸೇರುವಂತೆ ಮಾಡುತ್ತಿದೆಯೇ? ಅದು ಮಕ್ಕಳು ವಿಭಿನ್ನ ರೀತಿಯಲ್ಲಿ ಯೋಚಿಸುವಂತೆ ಪ್ರೇರೇಪಿಸುತ್ತಿದೆಯೇ? ಅದು ಓದುವುದು ಒಂದು ಆನಂದದಾಯಕ ಕಾರ್ಯವೆನ್ನುವ ಭಾವನೆಯನ್ನು ಮೂಡಿಸುತ್ತಿದೆಯೇ?

ಇದನ್ನು ಕುರಿತ ಚರ್ಚೆಯನ್ನು ಪುಸ್ತಕದ ನನಗೆ ರೂಪದಲ್ಲಿ ಸಿಕ್ಕ ಒಂದು ಕಥೆಯೊಂದಿಗೆ ಆರಂಭಿಸುವುದು ಒಳ್ಳೆಯದೆನಿಸುತ್ತದೆ-

ಒಂದು ಗಿಳಿ ಇತ್ತು. ಅದರ ಹೆಸರು ಮಿಟ್ಠೂ. ಅದು ತನ್ನ ಪತ್ನಿಯೊಂದಿಗೆ ಒಂದು ಮರದ ಮೇಲೆ ವಾಸಿಸುತ್ತಿತ್ತು. ಆ ಮರದ ಪಕ್ಕದಲ್ಲಿಯೇ ರಾಣಿಯೊಬ್ಬಳ ಮಹಲಿತ್ತು. ಮಹಲಿನ ಉದ್ಯಾನದಲ್ಲಿ ಹಲವು ಸೀಬೆಹಣ್ಣಿನ ಮರಗಳಿದ್ದವು. ಮಿಟ್ಠೂಗೆ ಹಸಿವಾದಾಗಲೆಲ್ಲ ಅದು ಮಹಲಿನ ಉದ್ಯಾನದಿಂದ ಸೀಬೆಹಣ್ಣನ್ನು ಕಿತ್ತು ತರಲು ಹೋಗುತ್ತಿತ್ತು. ಮಿಟ್ಠೂ ಸೀಬೆಹಣ್ಣನ್ನು ತಿನ್ನುವುದಕ್ಕಿಂತ ಎಸೆಯುತ್ತಿದ್ದುದು ಅಥವಾ ಹಾಳುಮಾಡುತ್ತಿದ್ದುದೇ ಹೆಚ್ಚು. ಇದನ್ನು ಕಂಡು ರಾಣಿ ಬಹಳ ದುಃಖಿತಳಾಗಿದ್ದಳು. ಈ ಗಿಳಿ ಸೀಬೆಹಣ್ಣನ್ನು ಹಾಳುಮಾಡುವುದನ್ನು ತಪ್ಪಿಸುವುದು ಹೇಗೆಂದು ಚಿಂತಿಸಿದಳು. ಒಂದು ದಿನ ಮಿಟ್ಠೂ ಸೀಬೆಹಣ್ಣನ್ನು ಕೀಳಲು ಬಂದಾಗ ರಾಣಿ ಅದನ್ನು ಹಿಡಿದುಬಿಟ್ಟಳು. ಮಿಟ್ಠೂ ತನ್ನನ್ನು ಬಿಡು ಎಂದು ಬಹಳವಾಗಿ ಬೇಡಿಕೊಂಡಿತು. ರಾಣಿಯು ಮಿಟ್ಠೂಗೆ, "ನಾನು ನಿನ್ನನ್ನು ಬಿಡುವುದಿಲ್ಲ, ನಿನ್ನನ್ನು ನನ್ನ ಬಳಿಯೇ ಇಟ್ಟುಕೊಳ್ಳುತ್ತೇನೆ ಹಾಗೂ ಒಳ್ಳೊಳ್ಳೆಯ ಸೀಬೆಹಣ್ಣುಗಳನ್ನು ತಿನ್ನಲು ಕೊಡುತ್ತೇನೆ" ಎಂದು ಹೇಳಿದಳು. ಮಿಟ್ಠೂಗೆ ಬಹಳ ಸಂತೋಷವಾಯಿತು. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ಅದಕ್ಕೆ ತನ್ನ ಹೆಂಡತಿಯ ನೆನಪು ಕಾಡಲಾರಂಭಿಸಿತು. ಅದು ರಾಣಿಗೆ, "ನನ್ನ ಹೆಂಡತಿ ನನಗಾಗಿ ಕಾಯುತ್ತಿರುತ್ತಾಳೆ. ಅವಳು ಹಸಿದಿರಬಹುದು" ಎಂದಿತು. ರಾಣಿಗೆ ದಯೆ ಉಕ್ಕಿ ಬಂತು. ಅವಳು ಹಲವು ಸೀಬೆಹಣ್ಣು ಹಾಗೂ ಹಣ್ಣುಗಳನ್ನು ಕಿತ್ತು ಮಿಟ್ಠೂಗೆ ಕೊಟ್ಟು ಹೀಗೆಂದಳು. ಇವನ್ನು ನೀನು ನಿನ್ನ ಹೆಂಡತಿಗೆ ಕೊಡು ಮತ್ತು ಇಬ್ಬರೂ ಸೇರಿ ತಿನ್ನಿರಿ. ಮಿಟ್ಠೂ ಮನೆಗೆ ಹೋಗಿ ಈ ಎಲ್ಲ ಸಂಗತಿಯನ್ನು ತನ್ನ ಪತ್ನಿಗೆ ಹೇಳಿತು. ಪತ್ನಿಯೂ ಮಿಟ್ಠೂಗೆ ಇನ್ನೆಂದೂ ಹಣ್ಣುಗಳನ್ನು ಹಾಳು ಮಾಡಬೇಡ ಎಂದು ಬುದ್ಧಿ ಹೇಳಿದಳು.

ಮಕ್ಕಳಿಗಾಗಿ ಬರೆದಿರುವ ಉತ್ತಮ ಸಾಹಿತ್ಯದಲ್ಲಿ ಆಸಕ್ತರಾಗಿದ್ದಲ್ಲಿ ನೀವು ಈ ಕಥೆಯಲ್ಲಿನ "ರೋಗ"ವನ್ನು ಗುರುತಿಸಿರಬಹುದು. ಗಿಳಿಗಳ ರೂಢಿಗತ ಮಾನವೀಕರಣವನ್ನು ನಾವು ಈ ಕಥೆಯಲ್ಲಿ ಕಾಣಬಹುದಾಗಿದೆ. ಮನುಷ್ಯರ ರಚನೆಯೆಂದ ಮೇಲೆ ಅಲ್ಲಿ ಒಂದಿಲ್ಲೊಂದು ಮಾನವೀಕರಣದ ಛಾಯೆ ಇದ್ದೇ ಇರುತ್ತದೆ. ಇದರಲ್ಲಿ ಗಿಳಿ ದುಡಿಯುವ ಪತಿ, ಹೆಣ್ಣುಗಿಳಿಯು ಪತಿಯ ಮೇಲೆ ಆಶ್ರಿತಳಾದ ಗೃಹಿಣಿ. ಅವೆರಡೂ ನಾವು ಬದುಕುವಂತಹ ಸಮಾಜದಲ್ಲಿಯೇ ಬದುಕುತ್ತಿದ್ದಾರೆ. ಗಿಳಿಯು ಮಕ್ಕಳ ಹಾಗೆ ಆಹಾರವನ್ನು ಚೆಲ್ಲಾಡುತ್ತದೆ. ಆಹಾರವನ್ನು ಎರಚಾಡುವುದು ಕೆಟ್ಟ ಅಭ್ಯಾಸ. ಇದನ್ನು ಗಿಳಿಗಳಿಗಿಂತಲೂ ಹಿರಿಯರು ನಿರ್ಧರಿಸುತ್ತಾರೆ. 'ರಾಣಿ'ಯಂತೆ ದೊಡ್ಡವರಾದ ನಾವು ಮಕ್ಕಳಿಗೆ ಯಾವುದು ಒಳ್ಳೆಯದು, ಯಾವುದು ಕೆಟ್ಟದ್ದು ಎಂದು ನಿರ್ಧರಿಸುತ್ತೇವೆ. ಊಟ ಮಾಡುವಾಗ ಆಹಾರವನ್ನು ಚೆಲ್ಲಾಡುವುದು ಒಳ್ಳೆಯ ಅಭ್ಯಾಸವಲ್ಲ ಎನ್ನುವ ಸ್ವೀಕಾರದ ಮಾತಿನಿಂದಲೇ ಕಥೆಯು ಮುಕ್ತಾಯವಾಗುತ್ತದೆ.

ಕತೆಯಲ್ಲಿನ ರಾಣಿ ಮಕ್ಕಳ ಪೋಷಕರು ಅಥವಾ ಶಾಲೆಯ ಶಿಕ್ಷಕರು ಹೀಗೆ ಯಾರಾದರೂ ಆಗಿರಬಹುದು! ಜೊತೆಗೆ ಕೆಟ್ಟ ಅಭ್ಯಾಸಗಳ ಪಟ್ಟಿಯನ್ನು ಮಾಡಬಹುದಾಗಿದೆ –

- ಪ್ರತಿದಿನ ಸ್ನಾನ ಮಾಡದಿರುವುದು ಒಳ್ಳೆಯ ಅಭ್ಯಾಸವಲ್ಲ.
- ದಿನವೂ ಹಲ್ಲುಜ್ಜದಿರುವುದು ಒಳ್ಳೆಯ ಅಭ್ಯಾಸವಲ್ಲ.
- ತರಗತಿಯಲ್ಲಿ ತಮ್ಮತಮ್ಮಲ್ಲಿ ಮಾತನಾಡುವುದು ಒಳ್ಳೆಯ ಅಭ್ಯಾಸವಲ್ಲ.
- ದಿನವೂ ಶಾಲೆಗೆ ಹೋಗದಿರುವುದು ಒಳ್ಳೆಯ ಅಭ್ಯಾಸವಲ್ಲ.
- ಬೆಳಗ್ಗೆ ಎದ್ದ ತಕ್ಷಣ ತಂದೆ-ತಾಯಿಗೆ ವಂದಿಸದಿರುವುದು ಒಳ್ಳೆಯ ಅಭ್ಯಾಸವಲ್ಲ.
- "ಕೆಟ್ಟ ಮಕ್ಕಳ"? ಜೊತೆ ಸೇರುವುದು ಒಳ್ಳೆಯ ಅಭ್ಯಾಸವಲ್ಲ.

ನಾವು ಹೇಳುವ ಈ "ಕೆಟ್ಟ ಅಭ್ಯಾಸದ ರಾಗ"ವು ಮಕ್ಕಳ ಕಿವಿಗಳಲ್ಲಿ ಸದಾ ಗುಂಯ್ಗುಡುತ್ತಿರುತ್ತದೆ. ಮಕ್ಕಳಿಗೆ ಬರೆಯುವ ಸಾಮಗ್ರಿಗಳನ್ನು ಹಾಗೂ ಕೌಶಲ್ಯಗಳನ್ನು ಪರಿಚಯಿಸಲು ಬಳಸುವ ಸಾಹಿತ್ಯವು ಅವರಲ್ಲಿ ಓದುವ ಕುತೂಹಲವನ್ನು ಕೆರಳಿಸಬೇಕು. ಅದರಲ್ಲಿ ಹೊಸ ಅನುಭವ, ಭಾಷೆಯ ಸೊಗಸು, ಮುಂತಾದುವುಗಳನ್ನು ತೆರೆದಿಡಬೇಕು. ಅದು ಬಿಟ್ಟು ಇಲ್ಲಿಯೂ ಅದೇ "ರಾಗ"ವನ್ನು ಹಾಡುತ್ತಲೇ ಇರಬೇಕೇನು?

ಇದರಲ್ಲಿ ರಾಣಿಯ ಜಾಗದಲ್ಲಿ ರೈತ ಇರುತ್ತಾನೆಂದು ಕಲ್ಪಿಸಿಕೊಳ್ಳಿ! ಗಿಳಿಯ ಜಾಗದಲ್ಲಿ ಮೊಲ, ಕೋತಿ ಅಥವಾ ಕರಡಿಯೂ ಇರಬಹುದು! ಆಗಲೂ ಈ ಕತೆಯು "ಕೆಟ್ಟ ಅಭ್ಯಾಸದ ರಾಗ" ದ ಉಪದೇಶದಿಂದ ಮುಕ್ತವಾಗುವುದಿಲ್ಲ. ದುಃಖದ ಸಂಗತಿಯೆಂದರೆ ಆರಂಭಿಕ ಓದುಗರಿಗಾಗಿ ರಚಿಸುವ ಬಹುತೇಕ ಸಾಹಿತ್ಯವು ಇದೇ ರೀತಿಯ ರಚನೆಗಳಿಂದ ತುಂಬಿಹೋಗಿದೆ.

ಬಾಲ ಸಾಹಿತ್ಯದ ಇನ್ನೊಂದು ಪ್ರಕಾರವಿದೆ. ಆದರಲ್ಲಿ ನಗರದ ಮಕ್ಕಳನ್ನು "ಹೀರೋ" ಮಾಡಲಾಗುತ್ತದೆ. ನಾನು ಕೆಲವು ಕಾಲ್ಪನಿಕ ಶೀರ್ಷಿಕೆಗಳನ್ನು ಕೊಡುತ್ತಿದ್ದೇನೆ. ನೀವು ಇವುಗಳೊಂದಿಗೆ ತಾಳೆ ಹೊಂದುವ ಶೀರ್ಷಿಕೆಗಳನ್ನು ನೋಡಿರಬಹುದೆಂದು ಭಾವಿಸುತ್ತೇನೆ. "ಪಿಂಕೂವಿನ ಬುದ್ಧಿವಂತಿಕೆ", "ಸ್ನೇಹಿತನಿಗೆ ಸಹಾಯ", "ಕಳ್ಳರಿಗೆ ಪಾಠ ಕಲಿಸಿದ ರಾಜು" ಮುಂತಾದವು. ಅರ್ಧ ಕಥೆ ಹಾಗೂ ಅದರ ಪೂರ್ಣ ಸಾರವನ್ನು ನೀವು ಈ ಶೀರ್ಷಿಕೆಗಳಿಂದಲೇ ಊಹಿಸಿಬಿಡಬಹುದು.

ಮತ್ತೊಂದು ಪ್ರಕಾರವೆಂದರೆ ಉಪದೇಶ ನೀಡುವುದು. ಹಾಗೆ ನೋಡಿದರೆ ಉಪದೇಶ ಎಲ್ಲ ಕಡೆಯಲ್ಲಿಯೂ ಇದೆ. ಉದಾಹರಣೆಗೆ "ದುರಾಸೆಯ ಫಲ", "ಧೈರ್ಯದ ಫಲ", "ಅಸೂಯೆಗೆ ಸಿಕ್ಕ ಫಲ", "ಇಲಿಗಳಿಗೆ ಸಿಕ್ಕ ಪಾಠ" ಮುಂತಾದವು.

ಮೂರನೆಯ ಪ್ರಕಾರವೆಂದರೆ ಮಾನವೀಯ ದುರ್ಗುಣಗಳನ್ನು ಪ್ರಾಣಿಗಳ ಮೇಲೆ ಆರೋಪಿಸುವುದು. "ಚಾಲಾಕಿ ನರಿ", "ಮಾತುಗಾರ ಕಾಗೆ", "ಮೂರ್ಖ ಕೋತಿ", "ದಯಾಳು ಆನೆ" ಮುಂತಾದವು.

ನೀವು ಇಂತಹ ಇನ್ನೂ ಹಲವು ಪ್ರಕಾರಗಳನ್ನು ಹುಡುಕಬಹುದಾಗಿದೆ. ಇವುಗಳ ಕೆಲವು ಸಾಮಾನ್ಯ ಲಕ್ಷಣಗಳನ್ನು ಪರಿಗಣಿಸಬಹುದಾಗಿದೆ.

**ಒಂದು:** ಎಲ್ಲ ಕಥೆಗಳೂ ಮಕ್ಕಳಿಗೆ ಒಂದಿಲ್ಲೊಂದು ಉಪದೇಶ ನೀಡಲು ಬಯಸುತ್ತವೆ.

**ಎರಡು:** ಬಹಳಷ್ಟು ಕಥೆಗಳ ಪಾತ್ರಗಳನ್ನು ಬದಲಿಸಿದರೆ, ಉದಾ. ಕಾಗೆಯ ಸ್ಥಳದಲ್ಲಿ ಕೊಕ್ಕರೆ ಬಂದರೂ ಕಥೆ ಅದೇ ಆಗಿರುತ್ತದೆ.
**ಮೂರು:** ಎಲ್ಲ ಕಥೆಗಳೂ ಅರ್ಥದ ದೃಷ್ಟಿಯಿಂದ ಏಕರೂಪತೆ ಇದೆ. ಓದುಗರಿಗೆ ಅರ್ಥ ಹುಡುಕುವ ಅವಕಾಶ ಬಹಳ ಕಡಿಮೆ ಇರುತ್ತದೆ.

**ನಾಲ್ಕು:** ಇವುಗಳಲ್ಲಿ ಯಾವುದೇ ಹೊಸ ಕಲ್ಪನೆ ಅಥವಾ ಜಗತ್ತನ್ನು ನೋಡುವ ಹೊಸ ಕಿಟಕಿ ಇರುವುದು ಬಹಳ ವಿರಳವೆಂದೇ ಹೇಳಬೇಕು.

ಈ ರೀತಿಯ ರಚನೆಗಳನ್ನು ನೋಡಿದಾಗಲೆಲ್ಲ ಅನಿಸುವ ತುಂಬಾ ಬೇಸರದ ಸಂಗತಿಯೆಂದರೆ "ಮಕ್ಕಳ ಆಸಕ್ತಿ, ಕಲ್ಪನೆಗಳು ಹಾಗೂ ಅವರ ಆಲೋಚನೆ-ಗ್ರಹಿಕೆಯ ಸಾಮರ್ಥ್ಯವನ್ನು ಅರಿಯುವಲ್ಲಿ ನಾವು ಇನ್ನೂ ಎಷ್ಟೊಂದು ಅಲ್ಪಜ್ಞಾನಿಗಳು!"

ಈ ಮಬ್ಬು ಸನ್ನಿವೇಶದ ನಡುವೆಯೂ ಭರವಸೆಯ ಕೆಲವು ಮಿಂಚುಹುಳುಗಳಿವೆ. ಇದಕ್ಕೆ ಸಂಬಂಧಿಸಿದಂತೆ ನಾವು ಉಲ್ಲೇಖಿಸಬಹುದಾದ ಕೆಲವು ಹೆಸರುಗಳೆಂದರೆ ಪೀಪಲ್ಸ್ ಪಬ್ಲಿಷಿಂಗ್ ಹೌಸ್, ನ್ಯಾಷನಲ್ ಬುಕ್ ಟ್ರಸ್ಟ್, ಚಿಲ್ಡ್ರನ್ ಬುಕ್ ಟ್ರಸ್ಟ್, ಟಾಟಾ ರವರ ಪರಾಗ್ ಟ್ರಸ್ಟ್, ಏಕಲವ್ಯ, ಕಥಾ, ತೂಲಿಕಾ, ಮುಂತಾದುವು. ರೂಂ ಟು ರೀಡ್ ಹಾಗೂ ಪ್ರಥಮ್ ಮುಂತಾದವುಗಳ ಪ್ರಮುಖ ಉದ್ದೇಶ ಓದುವುದನ್ನು ಕಲಿಸುವುದು. ಆದರೆ ಆ ಸಂಸ್ಥೆಗಳು ಪಠ್ಯಪುಸ್ತಕದಲ್ಲಿ ಕಾಣುವ ಓದುವಿಕೆಯ ಸಂಕುಚಿತ ಗ್ರಹಿಕೆಯಿಂದ ನಿರ್ದೇಶಿತರಾಗಿಲ್ಲ ಎನ್ನುವುದು ಸಂತೋಷದ ಸಂಗತಿ. ಇದೇ ವಿಭಾಗದಲ್ಲಿ ನಾವು ಏಕಲವ್ಯ ಸಂಘಟನೆಯ ಪತ್ರಿಕೆಯಾದ "ಚಕ್‌ಮಕ್" ಹಾಗೂ "ಇಕ್‌ತಾರಾ" ಬಾಲಸಾಹಿತ್ಯ ಕೇಂದ್ರದ ಪತ್ರಿಕೆಯಾದ "ಪ್ಲೂಟೋ"ಗಳ ಹೆಸರುಗಳನ್ನೂ ತೆಗೆದುಕೊಳ್ಳಬಹುದಾಗಿದೆ.

ನಾವು ರಾಜಾಡಳಿತದಿಂದ ಜನಾಡಳಿತಕ್ಕೆ ಬಂದ ಒಬ್ಬ ರಾಣಿ ಹಾಗೂ ಗಿಳಿಯ ಕಥೆಯಿಂದ ಮಾತುಕತೆಯನ್ನು ಆರಂಭಿಸಿದ್ದವು. ಆ ಗಿಳಿಯು ಕಾಗೆಯೋ, ಕೊಕ್ಕರೆಯೋ ಅಥವಾ ನಾಯಿಯೋ ಆದರೂ ಸಹ ಕಥೆ ಅದೇ ಆಗಿರುತ್ತದೆ.

ಈಗ ನಾವು ಯಾವುದೇ ಸೈದ್ಧಾಂತಿಕ ವಿಮರ್ಶೆಯಿಲ್ಲದೆ ಮಕ್ಕಳಿಗಾಗಿ ಬರೆದಿರುವ ಕೆಲವು ರಚನೆಗಳನ್ನು ಓದುವ ಮೂಲಕ ಪುಟ್ಟ ಮಕ್ಕಳಿಗೆ ಯಾವ ರೀತಿಯ ಸಾಹಿತ್ಯ ಇರಬೇಕು ಎನ್ನುವುದನ್ನು ತಿಳಿದುಕೊಳ್ಳುವುದು ಉತ್ತಮ ಎನಿಸುತ್ತದೆ.

**ಒಂದು**

| | |
|---|---|
| ಶೇರ್ ದಹಾಡಾ ಜಂಗಲ್ ಮೇ | (ಸಿಂಹ ಘರ್ಜಿಸಿತು ಕಾಡಿನಲ್ಲಿ |
| ತೋ ತೋತೇ ಉಡ್ ಗಯೇ | ಹಾರಿಹೋದವು ಗಿಳಿಯೆಲ್ಲ |
| ಆಂಖ್ ಘುಮಾಕರ್ ತೋತೇ ಬೋಲೇ | ಕಣ್ಣು ತಿರುಗಿಸಿ ಗಿಳಿಗಳು ಹೇಳಿದವು |
| ಕಿಸ್ ಕೇ ಉಡ್ ಗಯೇ, ಹಮ್ ನಹೀಂ! | ಏನು ಹಾರಿತೋ, ನಾವಲ್ಲ!) |

*- ಪ್ರಭಾತ್*

**ಎರಡು**

| | |
|---|---|
| ಮಾ ನೇ ಕಹಾ ಪಾನೀ ಬರ್‌ಬಾದ್ ಮತ್ ಕರೋ | (ಅಮ್ಮ ಅಂದಳು ಹಾಳುಮಾಡದಿರು ನೀರು |
| ಮೈನೇ ನಲ್ ಬಂದ್ ಕರ್ ದಿಯಾ | ನಲ್ಲಿಯ ನಿಲ್ಲಿಸಿದೆ ಘಟ್ಟನೆ ನಾನು |
| ಮಾ ನೇ ಕಹಾ ಸಮಯ್ ಬರ್‌ಬಾದ್ ಮತ್ ಕರೋ | ಅಮ್ಮ ಅಂದಳು ಹಾಳುಮಾಡಬೇಡ ಸಮಯ |

| | |
|---|---|
| ಮೈನೆ ಘಡೀ ಬಂದ್ ಕರ್ ದೀ! | ಗಡಿಯಾರ ನಿಲ್ಲಿಸಿದೆ ಥಟ್ಟನೆ ನಾನು!) |

*- ವೃಶಾಲೀ ಜೋಶಿ*

**ಮೂರು**

| | |
|---|---|
| ಮಛಲೀ ಜಲ್ ಕೀ ರಾಣೀ ಹೈ | (ಮೀನು ನೀರಿನ ರಾಣಿಯಂತೆ |
| ಅಬ್ ಯಹ್ ಬಾತ್ ಪುರಾನೀ ಹೈ | ಈಗ ಈ ಮಾತು ಹಳತಂತೆ) |

*- ಸುಶೀಲ್ ಶುಕ್ಲ್*

**ನಾಲ್ಕು**

| | |
|---|---|
| ಕಿತನೀ ಭೋಲೀ ಕಿತನೀ ಪ್ಯಾರೀ | (ಎಷ್ಟು ಮುಗ್ಧ ಎಷ್ಟೊಂದು ಮುದ್ದು |
| ಸಬ್ ಪಶುವೋಂ ಮೇಲೆ ನ್ಯಾರೀ ಗಾಯ್ | ಪ್ರಾಣಿಗಳಲೆಲ್ಲ ಚಂದ ಈ ಹಸು |
| ಸಾರಾ ದೂಧ್ ಹಮೇ ದೇ ದೇತೀ | ಹಾಲನ್ನೆಲ್ಲಾ ಕೊಡುವುದು ನಮಗೆ |
| ಆವೋ ಇಸೇ ಪಿಲಾದೇ ಚಾಯ್ | ಬನ್ನಿ ಕುಡಿಸುವ ಚಹಾ ಅದಕ್ಕೆ!) |

*- ಶೇರ್‌ಜಂಗ್ ಗರ್ಗ್*

**ಐದು**

| | |
|---|---|
| ದೇರ್ ಸೇ ಪಹುಂಚಿ ಮೈ ಸ್ಕೂಲ್ | (ತಡವಾಗಿ ಹೋದೆ ಶಾಲೆಗೆ ನಾನು) |
| ಏಕ್‌ದಮ್ ಚಿಲ್ ಏಕ್‌ದಮ್ ಕೂಲ್ | ಬಹಳ ಚಿಲ್ ಬಹಳ ಕೂಲ್ |
| ಸರ್ ನೇ ಮೇರಾ ಬ್ಯಾಗ್ ಉತಾರಾ | ಸರ್ ನನ್ನ ಬ್ಯಾಗನು ಇಳಿಸಿ |
| ಔರ್ ದಿಯಾ ಚಂಪಾ ಕಾ ಫೂಲ್ | ಕೊಟ್ಟರು ನನಗೆ ಸಂಪಿಗೆ ಹೂ) |

**ಆರು**

| | |
|---|---|
| ಧಾನ್ ಲಗಾಯೀ ಹೈ | (ಧಾನ್ಯವ ಬಿತ್ತಿದ್ದೇವೆ ನಾವು |
| ಅಬ್ ಕೀ ಖೇತೋಂ ಮೇ ಹಮ್ ನೇ | ಈಗ ತಾನೇ ಹೊಲದಲ್ಲಿ |
| ಅಪನೀ ಜಾನ್ ಲಗಾಯೀ ಹೈ | ನಮ್ಮ ಪ್ರಾಣವನು ಜೊತೆಗಿಟ್ಟು) |

*- ಸುಶೀಲ್ ಶುಕ್ಲ್*

ಈ ಎಲ್ಲಾ ರಚನೆಗಳು ಕವಿತೆಗಳಾಗಿವೆ. ಆದರೂ ಕಥೆಗಳಂತೆ ಪ್ರಸಂಗಗಳಿವೆ. ಇವನ್ನು ಓದುವುದರಿಂದ ಮಕ್ಕಳಲ್ಲಿ ಗ್ರಹಿಕೆಯ ಹೊಸ ಕಿಟಕಿ ತೆರೆಯಬಹುದೇ ಎಂದು ಯೋಚಿಸಿ ನೋಡಿ. ಇವು ವಿಷಯ ವಸ್ತುಗಳನ್ನು ವಿಭಿನ್ನ ರೀತಿಯಿಂದ ನೋಡುತ್ತಿವೆಯೇ? ಇವು ಭಾಷೆ ಮತ್ತು ಮಾತಿನ ಮೂಲಕ ಈವರೆಗೆ ಮುಟ್ಟಿರದ ಯಾವುದಾದರೂ ಹೊಸ ಪುಟವನ್ನು ತೆರೆಯುತ್ತವೆಯೇ? ಇವು ಸಂವೇದನೆಗಳನ್ನು ವಿಸ್ತರಿಸುತ್ತವೆಯೇ? ಹಾಗೂ ಇವೆಲ್ಲದರ ಜೊತೆಗೆ ಮತ್ತೊಂದು ಅತ್ಯವಶ್ಯಕ ಸಂಗತಿಯೆಂದರೆ ಇವು ಮಕ್ಕಳಿಗೆ ಓದುವ ಆನಂದವನ್ನು ನೀಡುತ್ತಿವೆಯೇ?

***

**ಲೇಖಕರು:**

**ಚಂದನ್ ಯಾದವ್:** ಮೂರು ದಶಕಗಳಿಂದ ಶಿಕ್ಷಣ ಕಾರ್ಯಕರ್ತರಾಗಿ ಸಕ್ರಿಯವಾಗಿದ್ದಾರೆ. ಪ್ರಸ್ತುತ ಅವರು ಲಾಂಗ್ವೆಜ್ ಲರ್ನಿಂಗ್ ಫೌಂಡೇಶನ್ ನ ಜೊತೆ ಕಾರ್ಯನಿರ್ವಹಿಸುತ್ತಿದ್ದಾರೆ.

ಸಂಪರ್ಕ: chandansamwad@gmail.com